ಹೊ. ನ. ನೀಲಕಂಠೇಗೌಡ *

# ಇತಿಹಾಸಕಾರರ ನಿರ್ಲಕ್ಷ್ಯಕ್ಕೆ ಗುರಿಯಾದ ಕಾಶೀಪುರದ ಪ್ರಾಚೀನ ವಿದ್ಯಾಕೇಂದ್ರ

ಪ್ರಾಚೀನ ಕರ್ನಾಟಕದಲ್ಲಿ ಬಳ್ಳಿಗಾವೆ, ನಾಗಾವಿ, ಸಾಲೋಟಗಿ, ತಾಳಗುಂದ, ಮೇತುಂಗಿ, ಹೆಬ್ಬಾಳ, ಜಟಿಂಗ ರಾಮೇಶ್ವರ, ಕಾಡಿಯೂರು, ಕೋಲಹಳ್ಳಿ, ನಿಲಗುಂದ, ಬಾಗೇವಾಡಿ, ಗದಗು, ಬೇಹಟ್ಟಿ ಮುಂತಾದ ಸ್ಥಳಗಳು ಪ್ರಸಿದ್ಧವಾದ ವಿದ್ಯಾಕೇಂದ್ರಗಳಾಗಿದ್ದು ವಿದ್ಯಾಭ್ಯಾಸ ಕಾಂಕ್ಷಿಗಳಿಗೆ ವಿದ್ಯೆಯನ್ನು ಬೋಧಿಸುವ ಪುಣ್ಯಕಾರ್ಯದಲ್ಲಿ ಮಗ್ನವಾಗಿದ್ದವು.

ಆದರೆ ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕಿನ ಹಳೇಬೀಡು ಹೋಬಳಿಗೆ ಸೇರಿದ ಅಡಗೂರಿಂದ ಸುಮಾರು ಎರಡು ಕಿ.ಮೀ. ದೂರದಲ್ಲಿರುವ ಕಾಶೀಪುರ ಎಂಬ ಬೇಚಿರಾಕ್ ಗ್ರಾಮದಲ್ಲಿರುವ ಒಂದು ಪ್ರಾಚೀನ ವಿದ್ಯಾ ಕೇಂದ್ರದ ಬಗ್ಗೆ ಯಾರ ಗಮನುನವು ಹೋದಂತಿಲ್ಲ.

ಈ ಕಾಶೀಪುರದಲ್ಲಿ ಹೊಯ್ಸಳರ ಕೊನೆಯ ಕಾಲ ಹಾಗೂ ವಿಜಯನಗರದ ಆರಂಭದ ವೇಳೆಗೆ ಒಂದು ದೊಡ್ಡ ಶೈವ ಮಠವಿದ್ದು ವಿದ್ಯಾದಾನದಂತಹ ಶ್ರೇಷ್ಠವಾದ ಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದುದಲ್ಲದೆ ಸಮಾಜದಲ್ಲಿ ಕೋಮು ಸಾಮರಸ್ಯವನ್ನು ಕಾಪಾಡುವ ಕೆಲಸದಲ್ಲಿಯೂ ತೊಡಗಿಸಿಕೊಂಡದ್ದು ಗಮನಾರ್ಹವಾದ ಸಂಗತಿಯಾಗಿದೆ.

ಅಡಗೂರಿನ ಪೂರ್ವಕ್ಕೆ ಎರಡು ಕಿಲೋಮೀಟರ್ ದೂರದಲ್ಲಿ ಒಂದು ದೊಡ್ಡದಾದ ಆವರಣದಲ್ಲಿ ಕಾಶೀಪುರದ ಶೈವಮಠದ ಶಿಥಿಲ ಕಟ್ಟಡಗಳು ನಮ್ಮ ದೃಷ್ಟಿಗೆ ಗೋಚರ ವಾಗುತ್ತವೆ.

ಇಲ್ಲಿ ಪೂರ್ವ ಪಶ್ಚಿಮವಾಗಿ ೧೫೦ ಅಡಿಗಳು, ಉತ್ತರದಕ್ಷಿಣವಾಗಿ ೨೦೦ ಅಡಿಗಳಷ್ಟು ವಿಸ್ತಾರವಾದ ಆವರಣದಲ್ಲಿ ಕಟ್ಟಡಗಳಿವೆ. ಈ ಕಟ್ಟಡಗಳ ಮಧ್ಯ ಭಾಗದಲ್ಲಿ ಒಂದು ಶೈವ ಆಲಯವಿದೆ. ಈ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ ಹಾಗೂ ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಯಾವುದೇ ವಿಗ್ರಹಗಳಿಲ್ಲ. ಈ ಆಲಯದ ನವರಂಗದಲ್ಲಿರುವ ಕಂಭಗಳು ಹೊಯ್ಸಳ ಶೈಲಿಯವಾಗಿವೆ. ದೇವಾಲಯದ ಕಟ್ಟಡವು ಬಳಪದ ಕಲ್ಲಿನಿಂದ ನಿರ್ಮಿತವಾಗಿದ್ದರೂ ಸಹ ಅಷ್ಟು ಶ್ರೇಷ್ಠವಾದ ಕುಸುರಿ ಕಲೆಯನ್ನೇನೂ ಹೊಂದಿಲ್ಲ. ವಾಸ್ತುಶೈಲಿಯನ್ನು ಗಮನಿಸಿದರೆ ಬಹುಶಃ ೧೩ನೆಯ ಶತಮಾನದ ಕೊನೆಯ ಭಾಗದಲ್ಲಿ ನಿರ್ಮಿತವಾಗಿದೆಯೆಂದು ನಿರ್ಧರಿಸಬಹುದು. ಈ ದೇವಾಲಯದ ಬಳಿಯಲ್ಲಿ ಮತ್ತೊಂದು ಕಟ್ಟಡವಿದೆ. ಇದೂ ಒಂದು ದೇವಾಲಯದಂತೆಯೇ ನಿರ್ಮಿತವಾಗಿದ್ದು ಗರ್ಭಗೃಹ, ಅಂತರಾಳ ಹಾಗೂ ನವರಂಗಗಳನ್ನೊಳಗೊಂಡಿದೆ. ಗರ್ಭಗೃಹದಲ್ಲಿ ಒಂದು ಗದ್ದುಗೆ, ಹಾಗೂ ಗದ್ದುಗೆಯ ಮೇಲೆ ಶಿವಲಿಂಗವಿದೆ. ಈ ಎರಡು ಕಟ್ಟಡಗಳನ್ನು ಕೇಂದ್ರ ವಾಗಿರಿಸಿಕೊಂಡು ಸುತ್ತಲೂ ಹಲವಾರು ಕೋಣೆಗಳನ್ನು ನಿರ್ಮಿಸಲಾಗಿದೆ. ಇವುಗಳಲ್ಲಿ ಕೆಲವು ವಸತಿಗೃಹಗಳಾಗಿದ್ದು ನಾಲ್ಕಾರು ಕುಟುಂಬಗಳ ವಾಸಕ್ಕಾಗಿ ನಿರ್ಮಿತವಾದವುಗಳೆಂದು ಸುಲಭವಾಗಿ ತಿಳಿಯುತ್ತದೆ. ಮೂರ್ನಾಲ್ಕು ಕೋಣೆಗಳು ವಿಶಾಲವಾಗಿದ್ದು ಹಲವಾರು ಮಂದಿಯ ಸಾಮೂಹಿಕ ವಸತಿಗಾಗಿ ನಿರ್ಮಿತವಾಗಿರಬಹುದೆಂದು ಊಹಿಸಬಹುದಾಗಿದೆ.

* ಕನ್ನಡ ಉಪನ್ಯಾಸಕ, ಚಾಮರಾಜಪೇಟೆ ಪ್ರಥಮ ದರ್ಜೆ ಕಾಲೇಜು, ಚಾಮರಾಜಪೇಟೆ, ಬೆಂಗಳೂರು-೫೬೦೦೧೮

ಇವುಗಳ ಬಳಿಯಲ್ಲಿಯೇ ಒಂದು ಅಡಿಗೆಯ ಕೋಣೆ ಹಾಗೂ ಒಂದು ಉಗ್ರಾಣವಿದೆ. ದೇವಾಲಯದ ಬಲಬದಿಯಲ್ಲಿ ಒಂದು ದೊಡ್ಡ ಕೋಣೆಯಿದ್ದು ಇದು ಬಹುಶಃ ಪಾಠಶಾಲೆ ಯಾಗಿದ್ದಿರಬಹುದೆಂದು ಊಹಿಸಬಹುದಾಗಿದೆ. ಈ ಕಟ್ಟಡಗಳ ಸಂಕೀರ್ಣಕ್ಕೆ ಸುಮಾರು ೧೦೦ ಅಡಿಗಳ ದೂರದಲ್ಲಿ ಒಂದು ದೊಡ್ಡ ಕೆರೆ, ಹಾಗೂ ನಮ್ಮ ದೃಷ್ಟಿಗೆ ಗೋಚರವಾಗುವಷ್ಟು ದೂರಕ್ಕೂ ಗದ್ದೆಗಳು ಕಂಡುಬರುತ್ತವೆ. ಇಲ್ಲಿಯ ಎಲ್ಲಾ ಕಟ್ಟಡಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಹಾಗೂ ಇಲ್ಲಿ ದೊರೆಯುವ ಆಂತರಿಕ ಹಾಗೂ ಬಾಹ್ಯ ಪ್ರಮಾಣಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಇದು ಒಂದು ಪ್ರಾಚೀನ ವಿದ್ಯಾಕೇಂದ್ರವಾಗಿದ್ದುದರಲ್ಲಿ ಯಾವುದೇ ರೀತಿಯ ಅನುಮಾನಗಳು ಕಿಂಚಿತ್ತೂ ಬರುವುದಿಲ್ಲ.

ಈ ವಿದ್ಯಾಕೇಂದ್ರದ ಬಗ್ಗೆ ದೊರೆಯುವ ಶಾಸನಾಧಾರಗಳನ್ನು ಈಗ ಗಮನಿಸೋಣ. ಅಡಗೂರಿನ ವೀರಭದ್ರ ದೇವಾಲಯದಲ್ಲಿರುವ ಒಂದು ಶಾಸನದ ಪ್ರಕಾರ,

''ಶ್ರೀಶೈಲದ ಶ್ರೀ ಸ್ವಯಂಭು ಶ್ರೀ ಲಿಂಗ ಚಕ್ರವರ್ತಿ ಶ್ರೀ ಮಲ್ಲಿಕಾರ್ಜುನ ಮಹಾಲಿಂಗದೇವರ ದಿವ್ಯ ಶ್ರೀಪಾದ ಪದ್ಮಾರಾಧಕರಾದ ಶ್ರೀ ಕೈಲಾಸದ ಮೇಲಿನ ದ್ಯಾವಾ ಪೃಥ್ವಿ ಮಹಾಮಹತ್ತಿಗೆ ಮುಖ್ಯರಾದ ಅವಧಾನ್ಯದ ಅಯ್ಯಗಳ ಆರಾಧಕರಾದ ಶ್ರೀ ಸಿಂಗಿರಾಜ ಅಯ್ಯಗಳು ಅಡಗೂರ ಶ್ರೀ ವೀರಭದ್ರದೇವರಿಗೆ ಕೊಟ್ಟ ಧರ್ಮ ಶಾಸನವು. ಅವಧಾನ್ಯದ ಅಯ್ಯಗಳಿಗೆ ತಪೋ ರಾಜ್ಯವಹಂತಾಗಿ ಅಡಗೂರಲು ಸೊಸ್ತುಗೆಯಾಗಿ ಎತ್ತಿ ಬಹ ಗಣಾಬಾಧ ವರಹ ಗದ್ಯಾಣ ಳಕ್ಕೆ ದೇವರ ದೀಪ್ತಿ ನೈವೇದ್ಯಕ್ಕೆ ಕೊಟ್ಟುದು ವರಹ ಎರಡು ಹೊನ್ನನು ಕೊಟ್ವೆವು.''

ಮೇಲಿನ ಶಾಸನದಿಂದ ಅಡಗೂರಿನ ಶೈವಮಠಾಧೀಶರಾದ ಅವಧಾನ್ಯದ ಅಯ್ಯನವರ ಆರಾಧಕರಾದ ಶ್ರೀ ಸಿಂಗಿರಾಜಯ್ಯನವರು ವೀರಭದ್ರದೇವರ ನೈವೇದ್ಯಕ್ಕೆ ಹಾಗೂ ನಂದಾದೀಪಕ್ಕೋಸ್ಕರ ೪ ಗದ್ಯಾಣ ೨ ವರಹಗಳನ್ನು ಕೊಟ್ಟುದಾಗಿ ತಿಳಿದು ಬರುತ್ತದೆ. ಹಾಗೂ ಶಾಸನದಲ್ಲಿ ಅಡಿಗೂರಿನ ಮಠಾಧೀಶರಾದ ಅವಧಾನ್ಯದ ಅಯ್ಯನವರನ್ನು ಶ್ರೀ ಶೈಲದ ಮಲ್ಲಿಕಾರ್ಜುನನ ದಿವ್ಯ ಶ್ರೀ ಪಾದ ಪದ್ಮಾರಾಧಕರಾದ ಶ್ರೀ ಕೈಲಾಸದ ಮೇಲಿನ ದ್ಯಾವಾಪೃಥ್ವಿ ಮಹಾಮಹತ್ತಿಗೆ ಮುಖ್ಯರೆಂದು ಸ್ತುತಿಸಲಾಗಿದೆ. ಅಡಗೂರಿನ ಈ ಮಠವು ಕೈಲಾಸಕ್ಕಿಂತಲೂ ಶ್ರೇಷ್ಠವಾದ ಮಠವಾಗಿತ್ತೆಂದು ವರ್ಣಿಸಲಾಗಿದೆ. ಮಹಾಮಠ ಎಂಬ ಪದಕ್ಕೆ ಸಮಾನಾಂತರವಾಗಿ ಮಹಾಮಹತ್ತು ಎಂಬ ಪದವನ್ನು ಬಳಸಲಾಗಿದೆ.

ಅಡಗೂರಿನಿಂದ ಸುಮಾರು ೫ ಕಿ. ಮೀ. ದೂರದಲ್ಲಿರುವ ಹಳೇಬೀಡಿನ ಬಸ್ತಿಹಳ್ಳಿಯ ಒಂದು ಶಾಸನದಲ್ಲಿ ಹಳೇಬೀಡಿನ ಪುಷ್ಪಗಿರಿಯ ಮಲ್ಲಿಕಾರ್ಜುನ ದೇವಾಲಯದ ಬಗ್ಗೆ ಶೈವರಿಗೂ ಜೈನರಿಗೂ ವಿವಾದವಾದಾಗ ಎಲ್ಲ ಶೈವಮಠಗಳ ಮಠಾಧೀಶರೂ ಒಟ್ಟಿಗೆ ಸೇರಿ ಜೈನ ಧರ್ಮಕ್ಕೆ ಯಾರಾದರೂ ವಿಘ್ನ ಮಾಡಿದರೆ ಆತ ಶಿವದ್ರೋಹಿ, ಜಂಗಮದ್ರೋಹಿ, ವಿಭೂತಿ ರುದ್ರಾಕ್ಷಿಗೆ ತಪ್ಪಿದವನು, ಎಂದು ಶಾಸನ ಹಾಕಿಸುತ್ತಾರೆ. ಈ ನಿರ್ಣಯ ಕೈಗೊಳ್ಳುವಲ್ಲಿ ಅಡಗೂರಿನ ಮಠಾಧೀಶರೂ ಸೇರಿದ್ದರು. ಈ ರೀತಿಯ ಕೋಮು ಸಾಮರಸ್ಯದ ಕೆಲಸದೊಡನೆ ಜನರಲ್ಲಿ ಧರ್ಮ ಪ್ರಭಾವನೆ ನಡೆಸುತ್ತಿದ್ದ ಕಾಶೀಪುರದ ಶೈವಮಠವು ಒಂದು ವಿದ್ಯಾಕೇಂದ್ರವೂ ಆಗಿತ್ತೆನ್ನುವುದು ಗಮನಾರ್ಹ ಸಂಗತಿ. ಕಳೆದ ಸು. ೧೦೦-೧೫೦ ವರ್ಷಗಳವರೆಗೂ ಇಲ್ಲಿ ವಿದ್ಯಾಭ್ಯಾಸಕ್ಕಾಗಿ ಬರುತ್ತಿದ್ದವರಿಗೆ ಉಚಿತ ಊಟ ವಸತಿಗಳೊಂದಿಗೆ ವಿದ್ಯೆಯನ್ನು ಹೇಳಿಕೊಡುತ್ತಿದ್ದರೆಂದು ಅಲ್ಲಿನ ಸ್ಥಳೀಯರು ನಮ್ಮ ಕ್ಷೇತ್ರಕಾರ್ಯದ ವೇಳೆ ತಿಳಿಸಿದರು. ಅಲ್ಲಿನ ಜನರ ಬಾಯಿಯಲ್ಲಿ ಅದು ಇಂದಿಗೂ ಕಾಶೀಪುರ ಘಟ್ಯಾಸ್ಥಾನ ಎಂದೇ ಹೆಸರು ಪಡೆದಿದೆ. ಘಟಿಕಾಸ್ಥಾನ ಎಂದರೇನು ಎಂದು ತಿಳಿಯದ ನಿರಕ್ಷರ ಕುಕ್ಷಿಗಳೂ ಸಹ ಘಟಿಕಾಸ್ಥಾನದ ತದ್ಭವವಾದ ಘಟ್ಯಾಸ್ಥಾನ ಎಂದೇ ಹೇಳುತ್ತಾರೆ. ಹಿಂದೆ ಇಲ್ಲಿ ಅನೇಕ ತಪಸ್ವಿಗಳು ವಿದ್ಯೆ ಹೇಳಿಕೊಡುತ್ತಿದ್ದರು. ಅವರು ಮಹಾತಪಸ್ವಿಗಳಾಗಿದ್ದರು. ಅವರ ಗುದ್ದುಗೆಯೇ ಇಲ್ಲಿದೆ ಎಂದು ತೋರಿಸುತ್ತಾರೆ. ಸು. ೧೫೦ ವರ್ಷಗಳ ಹಿಂದೆ ಅಂದರೆ ನಮ್ಮ ತಾತನ ಕಾಲದವರೆಗೂ ಇಲ್ಲಿ ಮಠ ಇತ್ತು, ಅಲ್ಲಿ ಪಾಠಹೇಳಿಕೊಡುತ್ತಿದ್ದರು, ಎಷ್ಟೋ ಮಂದಿ ಪಾಠ ಕಲಿಯುತ್ತಿದ್ದರು ಎಂದು ಅಲ್ಲಿನ ಸ್ಥಳೀಯರು ತಿಳಿಸಿದರು.

ಇಲ್ಲಿ ಶೈವಮಠವಿದ್ದುದಕ್ಕೆ, ಹಾಗೂ ಮಠಾಧೀಶರಿದ್ದುದಕ್ಕೆ, ಮತ್ತು ಅವರು ಸಮಕಾಲೀನ ಧಾರ್ಮಿಕ

1. ಎ.ಕ.೯, ಬಸ್ತಿಹಳ್ಳಿ, ಬೇಲೂರು ೩೯೩, ಕ್ರಿ.ಶ. ೧೬೩೮, ಪುಟ.



ಕಾಶೀಪುರದ ಪ್ರಾಚೀನ ವಿದ್ಯಾಕೇಂದ್ರ




ಸಾಮರಸ್ಯವನ್ನು ಕಾಪಾಡುವಲ್ಲಿ ಹಾಗೂ ಧಾಮಿಕ ಸಂಘರ್ಷಗಳನ್ನು ಪರಿಹರಿಸುತ್ತಿದ್ದುದಕ್ಕೆ ಶಾಸನಾಧಾರಗಳಿದ್ದರೂ ಸಹ ಇದೊಂದು ವಿದ್ಯಾಭ್ಯಾಸದ ಕೇಂದ್ರವಾಗಿದ್ದುದಕ್ಕೆ, ಘಟಿಕಾಸ್ಥಾನವಾಗಿದ್ದುದಕ್ಕೆ ಯಾವುದೇ ಶಾಸನಾಧಾರಗಳಿಲ್ಲದಿರುವುದು ನಮ್ಮ ದುರ್ದೈವ. ಶಾಸನಾಧಾರಗಳಿಲ್ಲದಿದ್ದ ಮಾತ್ರಕ್ಕೆ ಇದು ವಿದ್ಯಾಭ್ಯಾಸದ ಕೇಂದ್ರವಾಗಿರಲಿಲ್ಲವೆಂದು ಹೇಳಲಾಗುವುದಿಲ್ಲ. ಪ್ರಾಚೀನ ಕರ್ನಾಟಕದ ಬಹುತೇಕ ಶೈವಮಠಗಳು ವಿದ್ಯಾದಾನದಲ್ಲಿ ತೊಡಗಿದ್ದುದು ಗಮನಾರ್ಹ ಅಂಶ. ಅಲ್ಲದೆ ಕಾಶೀಪುರದ ಕಟ್ಟಡ ಸಂಕೀರ್ಣದಲ್ಲಿರುವ ಶಾಲೆಯ ಕಟ್ಟಡ, ವಿದ್ಯಾರ್ಥಿಗಳ ವಸತಿಗೃಹಗಳು, ಉಪಾಧ್ಯಾಯರ ವಸತಿಗೃಹಗಳು ಮುಂತಾದ ಕಟ್ಟಡಗಳು, ಹಾಗೂ ಸ್ಥಳೀಯರಲ್ಲಿ ಅಸ್ತಿತ್ವದಲ್ಲಿರುವ ತಲೆಮಾರಿನಿಂದ ತಲೆಮಾರಿಗೆ ಹರಿದು ಬಂದಿರುವ ಐತಿಹ್ಯದ ರೂಪದಲ್ಲಿರುವ ಐತಿಹಾಸಿಕ ಸತ್ಯದ ಆಧಾರದಿಂದ ಈ ಕಾಶೀಪುರದ ಶೈವಮಠವು ಒಂದು ದೊಡ್ಡ ವಿದ್ಯಾಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ವಿದ್ಯಾಕೇಂದ್ರವನ್ನು ಕುರಿತಂತೆ ಯಾವುದಾದರೊಂದು ಶಾಸನ ದೊರೆತರೆ ಈ ಪ್ರಾಚೀನ ವಿದ್ಯಾಕೇಂದ್ರದ ಬಗ್ಗೆ ಮತ್ತಷ್ಟು ಬೆಳಕು ಚೆಲ್ಲಬಹುದು.

ನನ್ನ ಕ್ಷೇತ್ರಕಾರ್ಯದ ವೇಳೆಯಲ್ಲಿ ಹಿಂದೊಂದು ಕಾಲದಲ್ಲಿ ದೊಡ್ಡ ವಿದ್ಯಾಕೇಂದ್ರಗಳಾಗಿದ್ದ ಬಳ್ಳಿಗಾವೆ, ತಾಳಗುಂದ, ಗದಗು ಮುಂತಾದ ಹಲವಾರು ಸ್ಥಳಗಳನ್ನು ಸಂದರ್ಶಿಸಿದ್ದೇನೆ. ಆದರೆ ಇವುಗಳಲ್ಲಿ ಯಾವೊಂದು ವಿದ್ಯಾಕೇಂದ್ರಗಳ ಕಟ್ಟಡಗಳೂ ಸಂಪೂರ್ಣವಾಗಿ ಉಳಿದುಬಂದಿಲ್ಲ. ಆದರೆ ಕಾಶೀಪುರದ ಎಲ್ಲ ಕಟ್ಟಡಗಳೂ ಗಿಡಗೆಂಟೆಗಳು ಬೆಳೆದು ಸ್ವಲ್ಪ ಶಿಥಿಲವಾಗಿದ್ದರೂ ಸಹ ಇಂದಿಗೂ ಸುಭದ್ರವಾಗಿದ್ದು ಸಂಪೂರ್ಣವಾಗಿ ಉಳಿದುಕೊಂಡಿರುವುದು ನಮ್ಮ ಅದೃಷ್ಟ. ಪ್ರಾಚೀನ ವಿದ್ಯಾಕೇಂದ್ರಗಳು ಕಟ್ಟಡಗಳು ಹೇಗಿರುತ್ತಿದ್ದವೆನ್ನುವುದಕ್ಕೆ ಒಂದು ಶ್ರೇಷ್ಠ ಮಾದರಿಯಾಗಿ ಕಾಶೀಪುರವಿದೆ. ನಮ್ಮ ಪುರಾತತ್ವ ಇಲಾಖೆಯವರು ಈ ಸ್ಥಳದ ಬಗ್ಗೆ ಗಮನ ಹರಿಸಿ ಸಂರಕ್ಷಿಸಿದರೆ ನಮ್ಮ ಐತಿಹಾಸಿಕ ಪರಂಪರೆಯ ಒಂದು ಪ್ರಮುಖ ಸ್ಮಾರಕವನ್ನು ನಾಡಿಗೆ ಉಳಿಸಿಕೊಟ್ಟಂತಾಗುತ್ತದೆ. ಅಲಕ್ಷಿಸಿದರೆ ಉಳಿದುಕೊಂಡು ಬಂದ ಏಕೈಕ ವಿದ್ಯಾಕೇಂದ್ರದ ಕಟ್ಟಡವೂ ನಾಶವಾದಂತಾಗುತ್ತದೆ. ಈ ನಿಟ್ಟಿನಲ್ಲಿ ಅವರು ಕ್ರಮ ಕೈಗೊಂಡರೆ ನನ್ನ ಶ್ರಮ ಸಾರ್ಥಕವಾದಂತಾಗುತ್ತದೆ.[1]

1. ಕಾಶೀಪುರದ ಬಗ್ಗೆ ನಮ್ಮ ಗಮನ ಸೆಳೆದು ನಮ್ಮ ಕ್ಷೇತ್ರಕಾರ್ಯದಲ್ಲಿ ಸಹಕರಿಸಿ ನಮ್ಮೊಡನೆ ಬಂದಿದ್ದ ಅಡಗೂರಿನ ಕಿರಿಯ ಗೆಳೆಯ ಚಿರಂಜೀವಿ ಸಂದೀಪ್‌ನ ಸಹಾಯ ಸ್ಮರಣೀಯ.